# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 667

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 17-12-2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನಿನ ವಿಸ್ತೀರ್ಣವು 0.25 ಎಕರೆ (1000 ಚ.ಮೀ. ಅಥವಾ ಅದಕ್ಕಿಂತ ಕಡಿಮೆ ವಿಸ್ತೀರ್ಣದ ಜಮೀನುಗಳಿಗೆ ಸ್ಥಳೀಯ ಯೋಜನಾ ಪ್ರಾಧಿಕಾರಗಳಿಂದ ಬಹು ನಿವೇಶನ ಬಡಾವಣೆ ನಕ್ಷೆ ಅನುಮೋದನೆ ಸಂದರ್ಭದಲ್ಲಿ 5% ವಿಸ್ತೀರ್ಣದ ಜಮೀನನ್ನು ಆಟದ ಮೈದಾನಕ್ಕಾಗಿ ಹಾಗೂ ಭಾಗವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸುತ್ತಿರುವುದು ನಿಜವೇ; | ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 132 ಗ್ರಾಪಂಅ 2015, ದಿನಾಂಕ:19-03-2015 ರಲ್ಲಿ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಜಮೀನಿನ ವಿಸ್ತೀರ್ಣವು 1000 ಚ.ಮೀ. (0.10 ಹೆಕ್ಟೇರ್) ಅಥವಾ ಕಡಿಮೆ ಇದ್ದಲ್ಲಿ ಏಕನಿವೇಶನ ವಸತಿ / ವಸತಿಯೇತರರಿಗಾಗಿ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಯನ್ನು ಗ್ರಾಮ ಪಂಚಾಯತಿಗಳು ಮಾಡಲು ಅಧಿಕಾರ ನೀಡಿದೆ.<br><br>ಜಮೀನಿನ ವಿಸ್ತೀರ್ಣವು 1000 ಚ.ಮೀ. (0.10 ಹೆಕ್ಟೇರ್) ಅಥವಾ ಕಡಿಮೆ ಇದ್ದಲ್ಲಿ ಮಾತ್ರ ಗ್ರಾಮ ಪಂಚಾಯತಿಯು ಉದ್ಯಾನವನ, ಆಟದ ಮೈದಾನ ಹಾಗೂ ಬೈಲು ಜಾಗಕ್ಕಾಗಿ ಕಾಯ್ದಿರಿಸುವ ಅಗತ್ಯ ಇರುವುದಿಲ್ಲ.ಸಂಸದೀಯ ವ್ಯವಹಾರಗಳ ಇಲಾಖೆಯು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: DPAL 36 SHASANA 2021, DATED:07-10-2021 ರಂದು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ (ತಿದ್ದುಪಡಿ) ಅಧಿನಿಯಮ, 2021, ದಿನಾಂಕ:05-07-2021 ರಿಂದ ಜಾರಿಗೆ ಬಂದಿದ್ದು, ಪ್ರಕರಣ 4 ಕೆ ಹೊಸದಾಗಿ ಸೇರ್ಪಡೆ ಮಾಡಲಾಗಿದ್ದು, ಸ್ಥಳೀಯ ಯೋಜನಾ ಪ್ರದೇಶವನ್ನು ಹೊರತುಪಡಿಸಿದ ಪ್ರದೇಶದಲ್ಲಿ ಭೂ ಅಭಿವೃದ್ಧಿ ಬಗ್ಗೆ ಉಪಬಂಧ ಕಲ್ಪಿಸಲಾಗಿದ್ದು, ಸ್ಥಳೀಯ ಯೋಜನಾ ಪ್ರದೇಶವನ್ನು ಹೊರತುಪಡಿಸಿದ ಯಾವುದೇ ಭೂಮಿಯ ಮೇಲೆ ಅಭಿವೃದ್ಧಿಯನ್ನು ಕೈಗೊಳ್ಳಲು ಉದ್ದೇಶಿಸಿರುವ ಯಾರೇ ವ್ಯಕ್ತಿಯು ಅನುಮತಿಗಾಗಿ ಸ್ಥಳೀಯ ಪ್ರಾಧಿಕಾರಕ್ಕೆ ಲಿಖಿತ ಅರ್ಜಿಯನ್ನು ಸಲ್ಲಿಸತಕ್ಕದ್ದು. ಸ್ಥಳೀಯ ಪ್ರಾಧಿಕಾರವು ಅನುಮತಿ ನೀಡುವ ಮೊದಲು ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಅಥವಾ ಅವರಿಂದ ಅಧಿಕೃತಗೊಂಡು ನಗರ ಯೋಜನೆ ಸಹಾಯಕ ನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ಯಾರೇ ಅಧೀನ ಅಧಿಕಾರಿಯ ಪೂರ್ವಾನುಮೋದನೆಯನ್ನು ಪಡೆಯತಕ್ಕದ್ದು ಎಂದು ತಿಳಿಸಲಾಗಿದೆ. |
| (ಆ) | ಹಾಗಿದ್ದಲ್ಲಿ, ಕಾಯ್ದಿರಿಸಿದ ಜಾಗದ ಉದ್ದೇಶವನ್ನು ಈಡೇರಿಸಲು ಸಾಧ್ಯವೇ; | ಅನ್ವಯಿಸುವುದಿಲ್ಲ. |
| (ಇ) | ಭೂ ನಿವೇಶನ ವಿನ್ಯಾಸ ನಕ್ಷೆ ಮಂಜೂರಾತಿಯಲ್ಲಿ ೦.೦೧ ಎಕರೆ/೦.೦೨ ಎಕರೆ ಜಾಗವನ್ನು ಸಾರ್ವಜನಿಕ ಉಪಯೋಗಕ್ಕಾಗಿ ಸಣ್ಣ ಪ್ರಮಾಣದ ಜಾಗವನ್ನು ಕಾಯ್ದಿರಿಸಿರುವುದರಿಂದ ಪ್ರಯೋಜನವಾಗುವುದೇ; | ಅನ್ವಯಿಸುವುದಿಲ್ಲ. |
| (ಈ) | ಸಾರ್ವಜನಿಕ ಉಪಯೋಗಕ್ಕಾಗಿ ಇಷ್ಟು ಸಣ್ಣ ಪ್ರಮಾಣದ ಜಾಗವನ್ನು ಯಾವ ರೀತಿ ಸದುಪಯೋಗ ಪಡಿಸಿಕೊಳ್ಳಲು ಉದ್ದೇಶಿಸಲಾಗಿರುತ್ತದೆ? | ಅನ್ವಯಿಸುವುದಿಲ್ಲ. |

ಸಂ. ಗ್ರಾಅಪ 425 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ... ಸಚಿವರು